# ಶೈಕ್ಷಣಿಕ ವಿಷಯಗಳ ಜೊತೆ ಪರಿಸರ ಜಾಗೃತಿಯ ಸಂಯೋಜನೆ

ಸಲ್ವೈ ಸೆಲ್ವಂ ಮತ್ತು ಶಂಕರ್ ಕೆ.



'ವಾಲಂಟರಿ ಟೀಚರ್ಸ್ ಫೋರಮ್ (VTF) 1ನೇ ಸಭೆಯಲ್ಲಿ ಪುದುಚೆರಿಯ ವಿವಿಧ ಪ್ರಾಥಮಿಕ ಶಾಲೆಗಳ ಶಿಕ್ಷಕರು ಮತ್ತು ಪುದುಚೆರಿಯ ಅಜೀಂ ಪ್ರೇಮ್‌ಜಿ ಫೌಂಡೇಷನ್‌ನ ಸಂಪನ್ಮೂಲ ವ್ಯಕ್ತಿಗಳ ಒಂದು ಗುಂಪು ಸೇರಿ ತಮಿಳುನಾಡಿನ ಪಠ್ಯಪುಸ್ತಕಗಳನ್ನು ವಿಶ್ಲೇಷಣೆ ಮಾಡಿದೆವು. ಈ ಚರ್ಚೆಯಲ್ಲಿ ನಾವು, ತಮಿಳಿನ ನಾಲ್ಕು ಮತ್ತು ಐದನೇ ತರಗತಿಯ ಪಠ್ಯಪುಸ್ತಕಗಳು ನೀರು, ಬೀಜಗಳು, ಮೊಳಕೆಯೊಡೆಯುವಿಕೆ, ಮರಗಳು ಮತ್ತು ನಿಸರ್ಗದೊಡಗಿನ ಆಹ್ಲಾದ ಮುಂತಾದ ಪರಿಸರಕ್ಕೆ ಸಂಬಂಧಿಸಿದ ವಿಷಯಗಳ ಸುತ್ತವೇ ಹೆಣೆದಿರುವುದನ್ನು ಗಮನಿಸಿದೆವು. ಇದನ್ನು ಗಮನಿಸಿದ ನಾವು ನಮ್ಮ ವಿಶ್ಲೇಷಣೆಯನ್ನು ಪರಿಸರ ವಿಜ್ಞಾನ, ಇಂಗ್ಲಿಷ್ ಮತ್ತು ಗಣಿತ ಈ ಮುಂತಾದ ಪಠ್ಯಪುಸ್ತಕಗಳಿಗೂ ವಿಸ್ತರಿಸಿದೆವು. ಹಾಗೂ ಪಾಠಗಳು ಮತ್ತು ವಿಷಯಗಳನ್ನು ವಿಂಗಡಿಸಿದೆವು. ನಾವು ಪ್ರಕೃತಿ, ಜೀವನೋಪಾಯ, ಆರೋಗ್ಯ ಇವುಗಳಿಗೆ ಸಂಬಂಧಿಸಿದ ಪಾಠಗಳನ್ನು ಮತ್ತು ಕಲಿಕೆಗಳ ಪರಿಣಾಮಗಳನ್ನು ಹಾಗು ಭಾಷಾ ಕೌಶಲಗಳು ಮತ್ತು ಪರಿಸರ ಜಾಗೃತಿಯ ಸುತ್ತ ನಡೆಸಬಹುದಾದ ಕಲಿಕಾ ಚಟುವಟಿಕೆಗಳನ್ನು ಆರಿಸಿಕೊಂಡೆವು. ಬೋಧನೆ-ಕಲಿಕೆಯು ಅನುಭವಾತ್ಮಕ ಕಲಿಕೆ (Experiential learning), ಪರಿಸರ ಪ್ರಜ್ಞೆ ಮತ್ತು ಬಹುಭಾಷಾ ಪದ್ಧತಿ ಇವುಗಳನ್ನು ಒಳಗೊಳ್ಳುವಂತೆ ನಾವು ಪಾಠಗಳ ಬಗ್ಗೆ ಚರ್ಚಿಸಿ ಪಾಠಯೋಜನೆ (lesson plans)ಗಳನ್ನು ರಚಿಸಿದೆವು.

## ಯೋಜನೆ ಮತ್ತು ಗಮನ

ಪಾಠಗಳನ್ನು ಮರುರೂಪಿಸುವುದು

ಸಾಂಪ್ರದಾಯಿಕವಾಗಿ ಶಿಕ್ಷಕರು ಪಠ್ಯಪುಸ್ತಕದಲ್ಲಿರುವಂತೆಯೇ ಅನುಕ್ರಮವಾಗಿ ಪಾಠ ಮಾಡುತ್ತಾರೆ. ಇಲ್ಲಿ ನಾವು ಪರಿಸರಕ್ಕೆ ಸಂಬಂಧಿಸಿದ ಪಾಠಗಳನ್ನೆಲ್ಲ ಒಗ್ಗೂಡಿಸಿ, ಮೊಳಕೆ-ಯೊಡೆಯುವಿಕೆ, ಸಸಿಗಳನ್ನು ನೆಡುವಿಕೆ, ನೀರಿನ ಆಕರಗಳು, ಪ್ರಕೃತಿ ಸೌಂದರ್ಯವನ್ನು ಆಸ್ವಾದಿಸುವುದು ಮತ್ತು ಪ್ರಕೃತಿ ಹಾಗೂ ಕೃಷಿಯ ಬಗೆಗಿರುವ ಗಾದೆಗಳು / ನಾಣ್ಣುಡಿಗಳು... ಈ ರೀತಿಯಲ್ಲಿ ಮರು ಸಂಘಟಿಸಿಕೊಂಡೆವು.

ತರಗತಿಯ ಚಟುವಟಿಕೆಗಳನ್ನು ವಿನ್ಯಾಸಗೊಳಿಸುವುದು, ನಾವು ಆ ಸ್ಥಳಕ್ಕೆ ಅಥವಾ ಆ ಶಾಲೆಗೆ ವಿಶಿಷ್ಟವಾಗಿರುವಂತೆ ಕೆಲವು ಬೀಜಗಳ ಮೊಳಕೆಯೊಡೆಯುವಿಕೆ ಮತ್ತು ಇತರ ವಿಷಯಗಳನ್ನು ವಿನ್ಯಾಸಗೊಳಿಸಿದೆವು. ಶಿಕ್ಷಕರು ಅವರ ಆಸಕ್ತಿ, ಲಭ್ಯವಿರುವ ಸಂಪನ್ಮೂಲಗಳಿಗೆ ಅನುಗುಣವಾಗಿ ಇವುಗಳನ್ನು ಆಯ್ಕೆ ಮಾಡಿಕೊಳ್ಳಬಹುದಿತ್ತು. ಉದಾಹರಣೆಗೆ ತಾಳೆ ಮರದ ಪಾಠ ಬಂದಾಗ ನಾಲ್ಕನೆಯ ತರಗತಿಯ ಮಕ್ಕಳು ಮತ್ತು ತಮ್ಮ ತರಗತಿ ಶಿಕ್ಷಕರ ಜೊತೆ ತಾಳೆ ಮರವನ್ನು ನೋಡಿ ಬಂದರು. ಜೀವನೋಪಾಯಕ್ಕಾಗಿ ತಾಳೆ ಮರವನ್ನು ಅವಲಂಬಿಸಿರುವ, ತಾಳೆ ಮರ ಹತ್ತುವವರ ಬಳಿ ಅವರು ಮಾತನಾಡಿದರು. ತಾಳೆ ಮರದಿಂದ ತಯಾರಿಸಿದ ಕರಕುಶಲ ಮೇಳಕ್ಕೆ ಹೋಗಿ ತಾಳೆ ಮರದ ವಿವಿಧ ಭಾಗಗಳನ್ನು ನೋಡಿದರು ಮತ್ತು ಅದರ ಖಾದ್ಯಗಳನ್ನು ಸವಿದರು.

ಪಾಠ ಮತ್ತು ವಿಷಯಗಳ ಸಂಯೋಜನೆ

ಪುದುಚೆರಿಯ ಹೆಚ್ಚಿನ ಶಾಲೆಗಳು ಏಕೋಪಾಧ್ಯಾಯ ಶಾಲೆಗಳು. ಒಬ್ಬರೇ ಶಿಕ್ಷಕರು ಎಲ್ಲಾ ವಿಷಯಗಳನ್ನು ಕಲಿಸುತ್ತಾರಾದ್ದರಿಂದ ಬಹು ಸುಲಭವಾಗಿ ಅವರು ಬೇರೆ ವಿಷಯಗಳ ಜೊತೆಗೆ ಪರಿಸರ ಜಾಗೃತಿಯನ್ನು ಸಂಯೋಜಿಸಲು ಸಾಧ್ಯವಾಯಿತು. ಇದೇ ರೀತಿ ತಮಿಳು ಮತ್ತು ಇಂಗ್ಲಿಷ್ ಎರಡೂ ಭಾಷೆಗಳನ್ನು ಕಲಿಸುವ ಶಿಕ್ಷಕರಿಗೆ ಅವುಗಳ ಸಂಯೋಜನೆಯೂ ಸುಲಭವಾಯಿತು. ಆದ್ದರಿಂದ ತರಗತಿಗಳಲ್ಲಿ ಎರಡು ಭಾಷಾಜ್ಞಾನವನ್ನು ಏಕಕಾಲದಲ್ಲಿ ಪಡೆದುಕೊಳ್ಳಲು ಈ ಸಂಯೋಜನೆಯಿಂದ ಸಾಧ್ಯವಾಯಿತು.

ಶಿಕ್ಷಣದ ಗುರಿ ಮತ್ತು ಮೌಲ್ಯಗಳ ಒಳಗೊಳ್ಳುವಿಕೆ

ಶಿಕ್ಷಣದ ಉದ್ದೇಶದ ಕುರಿತಾದ ತರಗತಿಯ ಚರ್ಚೆಗಾಗಿ ನಾವು ಇತರರ ಭಾವನೆಗಳಿಗೆ ಮತ್ತು ಯೋಗಕ್ಷೇಮಕ್ಕೆ ಬೆಲೆ ಕೊಡುವ ವಿಷಯವನ್ನು ಆಯ್ದುಕೊಂಡೆವು. ನಾವು ಪ್ರಕೃತಿ, ಮಣ್ಣು, ನೀರು, ಗಾಳಿಯ ಬಗ್ಗೆ ಸೂಕ್ಷ್ಮ ಸಂವೇದನೆ ಹೊಂದಿದ್ದೇವೆಯೇ? ಈ ಕಡೆ ಗಮನಹರಿಸುತ್ತಿದ್ದೇವೆಯೇ? ನಮ್ಮ ಜೊತೆಗೆ ಬದುಕುತ್ತಿರುವ ಇತರ ಜೀವಜಂತುಗಳ ಬಗೆಗೂ ನಾವು ಸಂವೇದನಾಶೀಲರಾಗಿದ್ದೇವೆಯೇ?ಎಂಬ ಪ್ರಶ್ನೆಗಳನ್ನು ಕೇಳಲು ಆರಿಸಿಕೊಂಡಿದ್ದೆವು.

ಬಹುಭಾಷಾ ಕಲಿಕೆಗಿರುವ ಅವಕಾಶಗಳು

ಹೆಚ್ಚಿನ ಶಿಕ್ಷಕರು ತರಗತಿಯಲ್ಲಿಯ ಚಟುವಟಿಕೆಗಳು ಮತ್ತು ಅನುಭವಗಳನ್ನು ಹೇಳಿಕೊಳ್ಳುವಾಗ ಮತ್ತು ಅಭ್ಯಾಸಗಳನ್ನು ಮಾಡಿಸುವಾಗ ಇಂಗ್ಲಿಷ್ ಮತ್ತು ತಮಿಳು ಈ ಎರಡೂ ಭಾಷೆಗಳನ್ನು ಉಪಯೋಗಿಸುತ್ತಿದ್ದರು.

## ತರಗತಿ ಯೋಜನೆಗಳು ಮತ್ತು ಚಟುವಟಿಕೆಗಳು

ದೈನಂದಿನ ಚಟುವಟಿಕೆಗಳಲ್ಲಿ ಪರಿಸರ ಸಂಬಂಧೀ ವಿಷಯಗಳನ್ನು, ಸಮಾಜದ ಜೊತೆ ಬೆರೆಯುವಂತೆ ಮತ್ತು ಸಂವಹನ ಮಾಡುವಂತೆ, ಆ ಅನುಭವಗಳನ್ನು ಬರೆಯುವ, ಓದುವ ಚಟುವಟಿಕೆಗಳಾಗಿ ಅಭಿವೃದ್ಧಿಪಡಿಸುವಂತೆ, ಮಕ್ಕಳು ನಿಸರ್ಗವನ್ನು ಆಸ್ವಾದಿಸುವಂತೆ ಮಕ್ಕಳಿಗೆ ನೆರವಾಗಲು ಚಟುವಟಿಕೆಗಳನ್ನು ಸಂಯೋಜಿಸಲಾಯಿತು. ಹೀಗೆ ಜೋಡಿಸಿದ ಪಾಠಗಳು ಹಾಡುವುದು, ಪರಿಸರದೊಂದಿಗೆ ಕ್ಷೇತ್ರ ಕಾರ್ಯ ಮತ್ತು ಪ್ರಾಥಮಿಕ ಭಾಷಾ ಸಂಬಂಧಿತ ಚಟುವಟಿಕೆಗಳನ್ನು ಒಳಗೊಂಡಿದ್ದವು.

ಹಾಗೆಯೇ ಮಕ್ಕಳು, ಮನೆಯಲ್ಲಿ ಗಿಡಗಳನ್ನು ನೆಡುವುದು, ಬಿತ್ತನೆ ಬೀಜಗಳ ಪಾತಿ/ಮಡಿ ತಯಾರಿಸುವುದು, ಸಮುದಾಯದಿಂದ ವಿವಿಧ ಮಾಹಿತಿ ಸಂಗ್ರಹಿಸುವುದು, ವಿವಿಧ ಕ್ಷೇತ್ರಗಳಿಗೆ ಭೇಟಿ ನೀಡುವುದು, ನೀರಿನ ತಾಣಗಳು, ತಾಳೆ ಮರದ ವಿವಿಧ ಕಲಾಕೃತಿಗಳನ್ನು ವೀಕ್ಷಿಸುವುದು ಮುಂತಾದ ಚಟುವಟಿಕೆಗಳಲ್ಲಿ ಸ್ವತಂತ್ರವಾಗಿ ತೊಡಗಿಕೊಂಡರು.

ಪಾಠ 1: ಮುಳೈಪಾರಿ ಉತ್ಸವ

ಸಸಿಮಡಿಗಳ, ಪೈರಿನ ಪಾತಿಗಳ ಸುತ್ತ ಜಾನಪದ ಹಾಡು ಮತ್ತು ನೃತ್ಯ ಮಾಡುವ ಮುಳೈಪಾರಿ (ಬೀಜ ಬಿತ್ತುವ) ಉತ್ಸವದೊಂದಿಗೆ ಶೈಕ್ಷಣಿಕ ವರ್ಷವು ಪ್ರಾರಂಭವಾಯಿತು. ಬೀಜ ಬಿತ್ತುವ ಪ್ರಕ್ರಿಯೆ ಕುರಿತ ಸಂವಾದ – ಬಿತ್ತನೆ ಬೀಜವನ್ನು ಸಿದ್ಧಪಡಿಸುವುದು, ಬೀಜ ಬಿತ್ತುವ ಹಬ್ಬ ಮತ್ತು ಇಡೀ ಕಾರ್ಯಕ್ರಮ ಹೇಗೆ ಆಯೋಜಿಸಲ್ಪಡುತ್ತದೆ ಎಂಬುದು ತರಗತಿಯಲ್ಲಿ ಮೊದಲಾಯಿತು. ಜನರಿಂದ ಈ ಕುರಿತು ಮಾಹಿತಿ ಸಂಗ್ರಹಿಸಲು ಮಕ್ಕಳನ್ನು ವಿವಿಧ ಗುಂಪುಗಳಾಗಿ ವಿಂಗಡಿಸಲಾಯಿತು. ಎಲ್ಲ ಚಟುವಟಿಕೆಗಳಲ್ಲಿಯೂ ಅದರಲ್ಲೂ ಮುಖ್ಯವಾಗಿ ಮೊಳಕೆಯೊಡೆಯುವಿಕೆಗೆ ಸಂಬಂಧಿಸಿದ ಚಟುವಟಿಕೆಗಳಲ್ಲಿ ಮಕ್ಕಳೆಲ್ಲರೂ ತೊಡಗಿಕೊಂಡರು. ಮೊಳಕೆಯೊಡೆದ ಸಸಿಯು ಹೇಗೆ ಬೆಳೆಯುತ್ತಿದೆ ಎಂಬುದರ ಕುರಿತು ಮಾತನಾಡುವುದು, ವರದಿ ನೀಡುವುದು ಮಕ್ಕಳ ದಿನನಿತ್ಯದ ಕಾರ್ಯಕ್ರಮವಾಯಿತು.

ಬೀಜಗಳಿಗೆ ಮಡಿಗಳನ್ನು ಸಿದ್ಧಪಡಿಸುವುದು, ಬೀಜಗಳ ಪ್ರಭೇದಗಳನ್ನು ಗುರುತಿಸುವುದು, ಮೊಳಕೆಯೊಡೆದು ಬಂದ ಸಸಿಗಳನ್ನು ಸಂಗ್ರಹಿಸುವುದು ಇವೇ ಮುಂತಾದ ಚಟುವಟಿಕೆಗಳಲ್ಲಿ ಇಡೀ ತರಗತಿಯು ಭಾಗಿಯಾಗಿರುತ್ತಿತ್ತು. ಮಕ್ಕಳ ದೈನಂದಿನ ಜೀವನಕ್ಕೆ ನೇರವಾಗಿ ಸಂಬಂಧಿಸಿದ ಚಟುವಟಿಕೆಗಳನ್ನು ಕುರಿತು ತಿಳಿಯುವುದು, ಓದುವುದು, ಚರ್ಚಿಸುವುದು, ಮಾಹಿತಿ ಸಂಗ್ರಹಿಸುವುದು ಇವೆಲ್ಲವೂ ಮಕ್ಕಳಿಗೆ ಸಂತೋಷ ಕೊಡುತ್ತಿತ್ತು. ಮಕ್ಕಳ ಸುತ್ತಮುತ್ತಲಿನ ಸಮುದಾಯವು ಈ ಚಟುವಟಿಕೆಗಳಲ್ಲಿ ಭಾಗಿಯಾಗಿತ್ತು. ಮಕ್ಕಳು ಮನೆಗಳಲ್ಲಿ ಬೀಜ ಬಿತ್ತುವುದೇ ಮುಂತಾದ ಕೆಲವು ಕೆಲಸಗಳನ್ನು ಸ್ವತಂತ್ರವಾಗಿ ಮಾಡತೊಡಗಿದರು. ಈ ಎಲ್ಲ ಚಟುವಟಿಕೆಗಳಿಗೆ ಸಂಬಂಧಿಸಿದ ಸಂವಾದಗಳು ಇತರ ಹಲವು ಶಾಲಾ ವಿಷಯಗಳ ಮೂಲಕವೂ ಮಕ್ಕಳಲ್ಲಿ ಅನೇಕ ಹೊಸ ವಿಚಾರಗಳನ್ನು ಮೂಡಿಸುವುದರಲ್ಲಿ ಸಹಾಯಕವಾದವು. ಮಕ್ಕಳು ತಾವು ಅರಿತ ವಿಷಯಗಳನ್ನು ಹಂಚಿಕೊಳ್ಳಲು ಮತ್ತು ಅರಿತಿರದ ಹೊಸ ವಿಷಯಗಳನ್ನು ಕಲಿಯಲು ಸದಾ ಉತ್ಸುಕರಾಗಿರುತ್ತಿದ್ದರು.




**ಚಿತ್ರ 1: 4 ನೇ ತರಗತಿಯ ತಮಿಳು ಪಠ್ಯಪುಸ್ತಕದ ಮುಳೈಪಾರಿ ಕುರಿತ ಪಾಠ**

ಪಾಠ 2: ತಾಳೆ  ಮರ

ಶಿಕ್ಷಕರು ತಾಳೆ ಮರದ  ಪಾಠದಿಂದ ಆಯ್ದ ಶಬ್ದಗಳನ್ನು ಬೋರ್ಡ್ ಮೇಲೆ ಬರೆದು, ಮೊದಲು ತಾವು ಜೋರಾಗಿ ಓದಿ, ನಂತರ ಮಕ್ಕಳಿಂದ ಓದಿಸಿದರು. ಅವು ತಾಳೆ ಮರ, ಬೀಸಣಿಕೆ, ಎಲೆಗಳು, ಪಕ್ಷಿಗಳು, ಪಕ್ಷಿಯ ಗೂಡು ಮತ್ತು ಬುಟ್ಟಿ ಇವೇ ಮುಂತಾದ ತಮಿಳು ಭಾಷೆಯ ಪದಗಳನ್ನು ಒಳಗೊಂಡಿದ್ದವು. ಈ ಪದಗಳನ್ನು ಉಪಯೋಗಿಸಿ ವಿದ್ಯಾರ್ಥಿಗಳು ವಾಕ್ಯಗಳನ್ನು ರಚಿಸಿದರು ಮತ್ತು ಈ ಪದಗಳು ಹೇಗೆ ತಾಳೆ ಮರದ ಜೊತೆಗೆ ಬೆಸೆದುಕೊಂಡಿವೆ ಎಂಬುದನ್ನು ತಿಳಿಸುವಂತೆ ಕೇಳಲಾಯಿತು. ಉದಾಹರಣೆಗೆ, ಮರದ ಯಾವ ಭಾಗವನ್ನು ತಾಳೆಗರಿ ಎಂದು ಕರೆಯುತ್ತಾರೆ? ಇತ್ಯಾದಿ.

ಚರ್ಚೆಯು ಮುಂದೆ ಮರದ ಮತ್ತು ಗಿಡದ (ಇವಿಎಸ್ ಅನ್ನು ಒಳಗೊಳಿಸಿ) ಭಾಗಗಳತ್ತ ಹೊರಳಿತು. ಈಗ ಮಕ್ಕಳು ತಾಳೆಗರಿ ಮತ್ತು ತಾಳೆ ಹಣ್ಣುಗಳನ್ನು ತೋರಿಸ– ಬಲ್ಲವರಾಗಿದ್ದರಿಂದ ಮರದ ಉಳಿದ ಭಾಗಗಳು ಹೇಗೆ ಕಾಣುತ್ತವೆ ಎಂಬುದು ಮುಂದಿನ ಪ್ರಶ್ನೆ. ಒಬ್ಬ ವಿದ್ಯಾರ್ಥಿ ಇದನ್ನು ವಿವರಿಸುತ್ತಿದ್ದಂತೆ, ಇನ್ನೊಬ್ಬ ವಿದ್ಯಾರ್ಥಿ ಬೋರ್ಡಿನ  ಮೇಲೆ ಮರದ ಚಿತ್ರವನ್ನು ಬಿಡಿಸಿದ. ಮಕ್ಕಳನ್ನು ತಾಳೆಯ ಹಣ್ಣು ಮತ್ತು ಎಳೆಯ ಕಾಯಿ ಕುರಿತು ಮಾತನಾಡುವಂತೆ  ಹೇಳಲಾಯಿತು. ಕೆಲ ಮಕ್ಕಳು ಈ ಎರಡರ ಬಗೆಗೆ ಗೊಂದಲಕ್ಕೊಳಗಾದ್ದರಿಂದ ಅವರಿಗೆ ಕಳಿತ ತಾಳೆಯ ಹಣ್ಣು ಮತ್ತು ಎಳೆಯ ಕಾಯಿಯ ಪ್ರತ್ಯೇಕ ಚಿತ್ರಗಳನ್ನು ತೋರಿಸಲಾಯಿತು. ಈ ಚಿತ್ರಗಳನ್ನು ನೋಡಿದ ಮಕ್ಕಳು ವ್ಯತ್ಯಾಸಗಳನ್ನು ಗುರುತಿಸಬಲ್ಲವರಾದರು.

ವಿದ್ಯಾರ್ಥಿಗಳಲ್ಲೊಬ್ಬ ತಾಳೆಯ ಚಿಪ್ಪನ್ನು ಉಪಯೋಗಿಸಿ ಮಾಡಿದ ಆಟಿಕೆಯೊಂದನ್ನು ಪ್ರದರ್ಶಿಸಿ ಅದನ್ನು ಮಾಡುವುದು ಹೇಗೆ ಎಂಬುದನ್ನೂ ವಿವರಿಸಿದ. ಶಿಕ್ಷಕರು ಒಂದು 'ತಾಳೆ ಕಮ್ಮಟ'ವನ್ನು ಆಯೋಜಿಸಿ ಅಲ್ಲಿ ಮಕ್ಕಳಿಂದ ತಾಳೆಯ ಗರಿಯಲ್ಲಿ ಬೀಸಣಿಕೆ, ಕೈಗಡಿಯಾರ (ವಾಚು), ಗಿಳಿ, ಕಿರೀಟ, ಗುಬ್ಬಚ್ಚಿ ಮುಂತಾದ ವಸ್ತುಗಳನ್ನು ಮಾಡಿಸಿದರು. ಮಕ್ಕಳು ಈ ಕಾರ್ಯದಲ್ಲಿ ಉತ್ಸಾಹದಿಂದ ಪಾಲ್ಗೊಂಡರು. ಅವರಿಗೆ ಸಣ್ಣ ಕೈಚೀಲ, ಬುಟ್ಟಿ, ಟೊಪ್ಪಿ ಮತ್ತು ಬೀಸಣಿಕೆ ಮುಂತಾದ ತಾಳೆಗರಿಯಿಂದ ಮಾಡಿದ ಇನ್ನುಳಿದ ವಸ್ತುಗಳನ್ನು ತೋರಿಸಲಾಯಿತು. ಅವನ್ನೆಲ್ಲ ನೋಡುತ್ತ ಮಕ್ಕಳು ತಮ್ಮ ತಮ್ಮಲ್ಲೇ ಅವುಗಳನ್ನು ಹೆಣೆಯುವ ವಿಧಾನವನ್ನು ಚರ್ಚಿಸುತ್ತಿದ್ದರು.

## ಬೇರೆ ಪಾಠಗಳು ಮತ್ತು ಕಲಿಕೆಗಳು

ಇದೇ ರೀತಿಯಲ್ಲಿ ಕೃಷಿ ಮತ್ತು ಪ್ರಕೃತಿಯ ಮೇಲಿನ ನಾಣ್ಣುಡಿಗಳಿದ್ದ ಪಾಠದಲ್ಲಿ ಮಕ್ಕಳು ನಾಣ್ಣುಡಿಗಳನ್ನು ಸಂಗ್ರಹಿಸಿ ಆ ಕುರಿತು ಚರ್ಚಿಸಿದರು. ಅವರು ಆ ನಾಣ್ಣುಡಿಗಳ ವಿವರಣೆಗಳುಳ್ಳ ಭಿತ್ತಿ ಚಿತ್ರ ಕೂಡ ತಯಾರಿಸಿದರು. ನೀರಿನ ಆಕರಗಳ ಕುರಿತ ಪಾಠಕ್ಕಾಗಿ ಮಕ್ಕಳು ನೀರಿನ ವಿವಿಧ ಆಕರಗಳ ಪಟ್ಟಿ ಮಾಡಿ ಅವುಗಳನ್ನು ಸಂದರ್ಶಿಸಿ, ಗಮನಿಸಿ ದಾಖಲಿಸಿಕೊಂಡರು. ಇದರಿಂದ ಅವರಿಗೆ ನೀರಿನ ಉಪಯೋಗ ಮತ್ತು ಬಳಕೆಯ ಕುರಿತು ಅರಿವುಂಟಾಯಿತು.

'ನಿಸರ್ಗವನ್ನು ಆಸ್ವಾದಿಸುವ' ಪಾಠದ ಸಂದರ್ಭದಲ್ಲಿ ನಾವು ನೀರಿನ ಸೆಲೆಯೊಂದಕ್ಕೆ ಭೇಟಿ ನೀಡಿ, ಮಕ್ಕಳಿಗೆ ಅವರ ಕಲ್ಪನಾ ಶಕ್ತಿಯನ್ನು ವಿಸ್ತರಿಸಿ, ನಸುಕಿನ ಜಾವದಲ್ಲಿ ಆ ಸ್ಥಳ ಹೇಗೆ ಕಾಣುತ್ತದೆ? ಎಂದು ಬರೆಯಲು ಮತ್ತು ಚಿತ್ರ ಬಿಡಿಸಲು ಹೇಳಿದ್ದರಿಂದ ಆ ಜಾಗದಲ್ಲಿ ಅವರು ಇನ್ನೂ ಹೆಚ್ಚು ಖುಷಿಪಡುವಂತಾಯಿತು. ಇದನ್ನು ಮತ್ತಷ್ಟು ಆನಂದದಾಯಕವಾಗಿಸಲು ನಾವು ನಸುಕಿನ ಜಾವದ ವಾತಾವರಣದ ಅನುಭವವನ್ನು ಹಂಚಿಕೊಳ್ಳುವುದು ಮತ್ತು ಪ್ರಕೃತಿಯನ್ನು ಕುರಿತಾದ ಕೆಲವು ಹಾಡುಗಳು ಮತ್ತು ಕಥೆಗಳನ್ನು ಓದುವುದನ್ನು ಇದರಲ್ಲಿ ಸೇರಿಸಿದೆವು. ಭಾರತಿ ದಾಸನ್ ಅವರು ಪ್ರಕೃತಿಯ ಮೇಲೆ ಬರೆದ ಹಾಡುಗಳನ್ನು ಮತ್ತು ಕವಿ ಭಾರತೀಯಾರ್ ಅವರು ನೀರು, ಗಾಳಿ ಮತ್ತು ಸೂರ್ಯನ ಮೇಲೆ ಬರೆದ ಕವನಗಳನ್ನು ಮಕ್ಕಳಿಂದ ಓದಿಸಿದೆವು. ಹೀಗೆ ನಮ್ಮ ಕಲಿಕಾ ವಿಧಾನದಲ್ಲಿ ಕಲೆ ಮತ್ತು ಹಾಡು, ನೃತ್ಯ, ಜನಪ್ರಿಯ ನಾಣ್ಣುಡಿಗಳ ಭಿತ್ತಿ ಚಿತ್ರಗಳು, ಆಹಾರದ ಪ್ರದರ್ಶನ ಇವೇ ಮುಂತಾದ  ಕಲಾತ್ಮಕ ವಿಷಯಗಳು ಸೇರಿದ್ದವು.

ಈ ಚಟುವಟಿಕೆಗಳೊಂದಿಗೆ, ಗಣಿತ ಪರಿಕಲ್ಪನೆಗಳು – ಮರಗಳನ್ನು ಮತ್ತು ಮೊಳಕೆಗಳನ್ನು ಎಣಿಸುವುದು, ಮರಗಳನ್ನು ಅಳತೆ ಮಾಡುವುದು ಮತ್ತು ಅವುಗಳ ಎತ್ತರವನ್ನು, ಹಾಗೆಯೇ ಮರವು ಆವರಿಸಿಕೊಂಡಿರುವ ಕ್ಷೇತ್ರದ ವಿಸ್ತೀರ್ಣದ ಅಂದಾಜು ಮಾಡುವುದು– ಮುಂತಾದವು ಸೇರಿದ್ದವು. ವಿದ್ಯಾರ್ಥಿಗಳ ಕಲಿಕೆಯನ್ನು ಖಾತ್ರಿಪಡಿಸಲು ಭಾಷಾ ಕೌಶಲಗಳು ಮತ್ತು ಗಣಿತ ಪರಿಕಲ್ಪನೆಗಳು ಇವಿಎಸ್ ಜೊತೆ ಬೆರೆತುಕೊಂಡಿದ್ದವು, ಮಕ್ಕಳ ಜೊತೆ ಸೇರಿ ಪ್ರಕೃತಿಗೆ ಸಂಬಂಧಿಸಿದ ಚಟುವಟಿಕೆಯ ವಿವಿಧ ಬಗೆಯ ಕಾರ್ಯಹಾಳೆಗಳನ್ನು ಸಿದ್ಧಪಡಿಸಿದೆವು. ನಾವು 5ನೇ ತರಗತಿಯ ಇವಿಎಸ್ ಕಾರ್ಯಹಾಳೆಗಳನ್ನು 4ನೇ ತರಗತಿಯಲ್ಲಿ ಬಳಸಿದೆವು.



ಚಿತ್ರ 3: ವಿದ್ಯಾರ್ಥಿಯೊಬ್ಬ ಪರಿಸರಕ್ಕೆ ಸಂಬಂಧಿಸಿದ ಕತೆಯನ್ನು ಹೇಳುತ್ತಿರುವುದು



ಚಿತ್ರ 4: ಮಣ್ಣಿನಿಂದ ವಿದ್ಯಾರ್ಥಿಗಳು ತಯಾರಿಸಿದ ವಿವಿಧ ಪ್ರಾಣಿಗಳ ಕಲಾಕೃತಿಗಳು

## ಸಾರಾಂಶ

ಭಾಷಾ ಕಲಿಕೆಯಲ್ಲಿ ಪರಿಸರದ ವಿಷಯಗಳನ್ನು ಸಂಯೋಜಿಸುವ ಕಲ್ಪನೆಯು, ದಿನನಿತ್ಯದ ಜೀವನದ ಘಟನೆಗಳ ಸಹಾಯ ಪಡೆದುಕೊಂಡು, ಪರಿಸರದ ಅನೇಕ ವಿಷಯಗಳ ಸಹಾಯದೊಂದಿಗೆ ತಿಳಿದ ವಿಷಯಗಳಿಂದ ತಿಳಿಯದ ವಿಷಯಗಳೆಡೆಗೆ ಸಾಗುವ ಪ್ರಕ್ರಿಯೆಯಲ್ಲಿ ಮಕ್ಕಳು ಅರ್ಥಗರ್ಭಿತ ಅನುಭವಾತ್ಮಕ ಶಿಕ್ಷಣವನ್ನು ಪಡೆಯುತ್ತಾ, ಹೆಚ್ಚು ಸ್ಪಷ್ಟವಾಗಿ ಅರ್ಥಮಾಡಿಕೊಳ್ಳಲು ಸಹಾಯವಾಯಿತು. ತರಗತಿಯ ಶಿಕ್ಷಕರು ಭಾಷೆ– ಪರಿಸರ ವಿಜ್ಞಾನದ ಪಾಠಗಳನ್ನು ಮತ್ತು ತಮಿಳು–ಇಂಗ್ಲೀಷ್ ಪಾಠಗಳನ್ನು ಮಿಶ್ರ ಮಾಡಿ ಕಲಿಸಲು ಶಕ್ತರಾದರು. ಪರಿಸರಪ್ರಜ್ಞೆ ಹೆಚ್ಚಿಸುವಲ್ಲಿ ನಾವು ಪರಿಸರ ಆಧಾರಿತ ಅನುಭವಗಳನ್ನು ಭಾಷೆ ಮತ್ತು ಗಣಿತದ ಜೊತೆಗೆ ಒಂದುಗೂಡಿಸಿ ಕಲಿಸಿದಾಗ, ತರಗತಿಯಲ್ಲಿನ ಅಭ್ಯಾಸವೂ ಸೇರಿದಂತೆ ಬೋಧನೆ–ಕಲಿಕೆ ವಿಧಾನವು ತುಂಬಾ ಪರಿಣಾಮಕಾರಿಯಾಯಿತು.

**ಕೊನೆಟಿಪ್ಪಣಿಗಳು**

1. ಸ್ವಯಂಸೇವಾ ಶಿಕ್ಷಕರ ವೇದಿಕೆಗಳು (Voluntary Teacher Forums -VTF) ಬಹು ಮಾದರಿ ಮಾರ್ಗವಾಗಿ ಶಿಕ್ಷಕರ ನಿರಂತರ ಕೌಶಲ ಅಭಿವೃದ್ಧಿಗಾಗಿ ಭಾರತದ ವಿವಿಧ ಪ್ರದೇಶಗಳಲ್ಲಿ ಅಜೀಂ ಪ್ರೇಮ್‌ಜಿ ಫೌಂಡೇಷನ್‌ನಿಂದ ಸಂಯೋಜಿತಗೊಂಡಿರುವವುಗಳಾಗಿವೆ.
2. ಇದೊಂದು, ಉತ್ತಮ ಫಸಲಿಗಾಗಿ ಪ್ರಾರ್ಥಿಸುತ್ತಾ ಬೀಜ ಬಿತ್ತನೆಯನ್ನು ಸಂಭ್ರಮಿಸುವ ತಮಿಳುನಾಡಿನ ಹಬ್ಬವಾಗಿದೆ.



**ಸಲೈ ಸೆಲ್ವಮ್** ಅವರು ಅಜೀಂ ಪ್ರೇಮ್‌ಜಿ ಫೌಂಡೇಷನ್‌ನ ಪುದುಚೆರಿ ಜಿಲ್ಲಾ ಸಂಸ್ಥೆಯಲ್ಲಿ ಸಂಪನ್ಮೂಲ ವ್ಯಕ್ತಿಯಾಗಿದ್ದಾರೆ. ಸರ್ಕಾರಿ ಶಾಲಾ ಶಿಕ್ಷಕರ ಸಾಮರ್ಥ್ಯ ವೃದ್ಧಿ ಕಾರ್ಯಕ್ರಮದಲ್ಲಿ ತೊಡಗಿಕೊಂಡಿದ್ದಾರೆ. ಎಸ್‌ಎಸ್‌ಎ ವೇದಿಕೆಯಲ್ಲಿ ಬಹು ನಿಕಟ ಕಾರ್ಯಕರ್ತರಾಗಿದ್ದಾರೆ ಮತ್ತು ತಮಿಳುನಾಡು ಪಠ್ಯಪುಸ್ತಕ ಸಮಿತಿಯ ಸದಸ್ಯರಾಗಿದ್ದಾರೆ. ಅವರನ್ನು salai.selvam@azimpremjifoundation.org ಮೂಲಕ ಸಂಪರ್ಕಿಸಬಹುದು.



**ಶಂಕರ್ ಕೆ** ಅವರು ಅಜೀಂ ಪ್ರೇಮ್‌ಜಿ ಫೌಂಡೇಷನ್‌ನ ಪುದುಚೆರಿ ಜಿಲ್ಲಾ ಸಂಸ್ಥೆಯಲ್ಲಿ ಸಂಪನ್ಮೂಲ ವ್ಯಕ್ತಿಯಾಗಿದ್ದಾರೆ. ನೂತನ ಮೌಲ್ಯಮಾಪನ ಆವಿಷ್ಕಾರಗಳು ಮತ್ತು ಅರ್ಥಪೂರ್ಣ ಭಾಷಾ ಬೋಧನೆಯಲ್ಲಿ ಆಸಕ್ತರಾಗಿದ್ದಾರೆ. ಅವರನ್ನು shankar.k@azimpremjifoundation.org ಮೂಲಕ ಸಂಪರ್ಕಿಸಬಹುದು.

ಅನುವಾದ: **ಕೇಶವಚಂದ್ರ** | ಪರಿಶೀಲನೆ: **ನಾಗಮಣಿ ಎಸ್.ಎನ್.**